ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಶಿವಮೊಗ್ಗ ಜಿಲ್ಲೆಗೆ ಮಂಜೂರು ಆಗಿರುವ ಶುದ್ಧ ನೀರಿನ ಘಟಕ ಕುರಿತು

ಶ್ರೀ ಆರ್. ಪ್ರಸನ್ನ ಕುಮಾರ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1367 (1571) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಹಾಗೂ ದಾವಣಗೆರೆ ಜಿಲ್ಲೆ ಹೊನ್ನಾಳಿ ಮತ್ತು ಚನ್ನಗಿರಿ ತಾಲ್ಲೂಕುಗಳಲ್ಲಿ ಇಲ್ಲಿಯವರೆಗೂ ಮಂಜೂರು ಆಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು ಕಾರ್ಯಾರಂಭ ಮಾಡಿರುವ ಘಟಕಗಳ ಸಂಖ್ಯೆ ಎಷ್ಟು, ನಿರ್ಮಾಣ ಹಂತದಲ್ಲಿರುವ ಘಟಕಗಳ ಸಂಖ್ಯೆ ಎಷ್ಟು ; ಹಾಗೂ ಸದರಿ ಘಟಕಗಳಿಗೆ ಬಿಡುಗಡೆಯಾಗಿರುವ ಖರ್ಚಾದ ಹಾಗೂ ಬಾಕಿ ಇರುವ ಅನುದಾನವೆಷ್ಟು; ತಾಲ್ಲೂಕುವಾರು, ಗ್ರಾಮ ಪಂಚಾಯತಿವಾರು, ಗ್ರಾಮವಾರು ಪ್ರತಿ ಘಟಕದ ವಿವರ ನೀಡುವುದು ;

(ಆ) ಶಿವಮೊಗ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಯೋಜನೆಯಲ್ಲಿ ಎಷ್ಟು ಘಟಕಗಳನ್ನು ಮಂಜೂರು ಮಾಡಲಾಗಿದೆ ? (ತಾಲ್ಲೂಕುವಾರು ವಿವರ ನೀಡುವುದು)